# ಹವಿಕರ ಕನ್ನಡ

[ಕನ್ನಡದಲ್ಲಿ ದೇಸಿ— ಹವಿಕರ ಕನ್ನಡದ ಕುರಿತು ವಿದ್ವಾಂಸರ ಮಾತುಗಳು— ಹವಿಕರ ಕನ್ನಡದ ವ್ಯಾಕರಣ ಲಕ್ಷಣಗಳು— ಭಾಷಾಶಾಸ್ತ್ರದೃಷ್ಟಿಯಿಂದ ಕೆಲವು ಹವಿಕರ ಶಬ್ದಗಳ ಪರಿಚಯ.]

ಹವ್ಯಕ, ಹವಿಕ (ಹವೀಕ), ಹೈಗ ಎಂಬ ನಾಮಧೇಯಗಳುಳ್ಳ ಜನ ವರ್ಗದ ಭಾಷೆ ಕನ್ನಡ. ಪ್ರಯೋಗವೈಶಿಷ್ಟ್ಯದಿಂದ ಇದಕ್ಕೆ **'ಹವ್ಯಕ ಭಾಷೆ'** ಅಥವಾ **'ಹವ್ಯಕರ (ಹವಿಕರ) ಕನ್ನಡ'** ಎಂಬ ಹೆಸರು ರೂಢವಾಗಿದೆ. ಹವಿಕರು ಶ್ರೀ ಗೋಕರ್ಣಮಂಡಲದ ಶ್ರೀ ಶಂಕರಾಚಾರ್ಯ ಗುರುಪರಂಪರೆಯ ಶಿಷ್ಯರಾಗಿರುವ ಬ್ರಾಹ್ಮಣರು. ಇವರ ಭಾಷೆಯನ್ನು ಪರಿಶೀಲಿಸಿದಾಗ ಇದು ಕನ್ನಡದ ಉಪಭಾಷೆ ಅಥವಾ ಕನ್ನಡದ ಪ್ರಾಚೀನತಮ ರೂಪಗಳನ್ನು ಉಳಿಸಿಕೊಂಡು ಒಳಿದು ಬಂದ ಕನ್ನಡವೆನಿಸಬಹುದು.

ಲೋಕಪ್ರಸಿದ್ಧವಾಗಿರುವ ಕನ್ನಡಕ್ಕೆ ಗ್ರಾಂಥಿಕ ವ್ಯಾವಹಾರಿಕ ಎಂಬೆರಡು ರೂಪಗಳಿವೆ. ಇವು ಒಂದನ್ನೊಂದು ಕೂಡಿಕೊಂಡು ಪೋಷಿಸಿಕೊಂಡು ಕಾಲಗಳನ್ನು ದಾಟಿ ಬಂದಿವೆ. ಗ್ರಾಂಥಿಕವು ಶಿಷ್ಟವ್ಯವಹಾರಾರ್ಹವಾಗಿ, ವ್ಯಾಕರಣ ನಿಯಮಿತವಾಗಿ ಮಾರ್ಗಬದ್ಧಸಾಹಿತ್ಯಗಳಲ್ಲಿ—ವಿದ್ವಜ್ಜನರ ಕೃತಿಗಳಲ್ಲಿ ಪ್ರಕಟವಾಗುವುದು. ಈ ಗ್ರಾಂಥಿಕ ಭಾಷೆಗೆ ಕಾಲಾನುಗುಣವಾಗಿ ಹಳಗನ್ನಡ, ನಡುಗನ್ನಡ, ಹೊಸಗನ್ನಡ ಎಂಬ ರೂಪಾನುಗುಣವಾದ ಹೆಸರುಗಳಾಗಿವೆ. ಕಾವ್ಯಗ್ರಂಥಗಳಲ್ಲಿ ಈ ರೂಪಗಳನ್ನು ನಾವು ಗುರುತಿಸಬಲ್ಲೆವು. ಆದರೆ ವ್ಯಾವಹಾರಿಕ ಭಾಷೆಯೆಂಬುದು ಹಿಂದೆ ಹೇಗಿತ್ತೆಂಬುದು ಕಷ್ಟ. ಹಿಂದಿನ ಸಾಹಿತ್ಯಗಳನ್ನು ನೋಡಿ, ಅಲ್ಲಿನ ಕೆಲವು ವಿಶಿಷ್ಟ ಪ್ರಯೋಗಗಳಿಂದ ಸ್ವಲ್ಪ ಊಹಿಸಬಹುದು; ಯಥಾರೂಪವನ್ನು ಸಮಗ್ರವಾಗಿ ತಿಳಿಯಲು ಸಾಧ್ಯವಾಗದು.

ಈ ವ್ಯಾವಹಾರಿಕಭಾಷೆ ಪ್ರದೇಶಾನುಗುಣವಾಗಿಯೂ ಜನಾನುಗುಣವಾಗಿಯೂ ವಿವಿಧರೂಪ ತಳೆಯುವುದು. ಇಂದಿನ ಹೊಸಗನ್ನಡದಲ್ಲಿ

ಮುಖ್ಯವಾಗಿ ಮಂಗಳೂರು ಕನ್ನಡ, ಧಾರವಾಡ ಕನ್ನಡ, ಮೈಸೂರು ಕನ್ನಡ– ಎಂಬ ಸ್ಥೂಲ ಪ್ರಭೇದಗಳಾಗಿವೆ. ಸೂಕ್ಷ್ಮವಾಗಿ ನಿರೀಕ್ಷಿಸಿದರೆ, ಇಂದಿನ ವ್ಯಾವಹಾರಿಕ ಕನ್ನಡದಲ್ಲಿ ಜಿಲ್ಲೆ ಜಿಲ್ಲೆಗೂ ರೂಪವ್ಯತ್ಯಾಸಗಳು ಗೋಚರಿಸ ಬಹುದು. ಈ ಪ್ರಭೇದವು ಗ್ರಾಂಥಿಕ ಭಾಷೆಯ ಮೇಲೂ ತನ್ನ ಪ್ರಭಾವವನ್ನು ಬೀರುತ್ತದೆ, ಅದನ್ನಿದು ಬಳಿವಂತೆ ಮಾಡುತ್ತದೆ. ಒಂದೇ ಭಾಷೆಯೊಳಗೆ ಇಂತಹ ಬಹುರೂಪತೆ ಇರುವುದು ಇಂದು ಮಾತ್ರವಲ್ಲ; ಒಂಬತ್ತನೆಯ ಶತ ಮಾನದ ಕನ್ನಡದಲ್ಲಿಯೂ ಇತ್ತೆಂದು "ಕವಿರಾಜಮಾರ್ಗ"ದಲ್ಲಿ ಹೇಳಿದೆ. ಅವು ಗಳಲ್ಲಿ ಒಂದನ್ನು ಆಡುವವರಿಗೆ ಇನ್ನೊಂದು ದೋಷಕರವಾಗಿ ಕಾಣಿಸುತ್ತಿ ತ್ತೆಂದು ಹೇಳಿದೆ. ಈ ವೈಶಿಷ್ಟ್ಯವನ್ನು ಅಲ್ಲಿ 'ದೇಶಿ' ಎಂದು ಕರೆಯಲಾಗಿದೆ—

ದೋಸಮೆನಿಸಿತೆಂದು ಬಗೆದು
ಭಾಪಿಸಿ ತಳ್ಱಸಂದು ಕನ್ನಡಂಗಳೊಳೆಂದುಂ
ಪಾಸುಗೆಯುಮನಱಿಯಲಾಗದೆ
ಬೇಸಱುಗುಂ ದೇಸಿ ಬೇಱೆವೇಱಪ್ಪುದಱಿಂ[1]

ಇಂದಿಗೆ ಉಳಿದುಕೊಂಡು ಬಂದಿರುವ ಈ ಕನ್ನಡದ "ಬೇರೆ ಬೇರೆತನ" ದಲ್ಲಿ "ಹವಿಕರ ಕನ್ನಡ" ಎಂಬುದೂ ಒಂದು. ಇದು ಜನಾನುಗುಣವಾದುದು. ಇದರಲ್ಲಿಯೂ ಪ್ರಾದೇಶಿಕವೆನಿಸುವ ಆಂತರಿಕಭೇದಗಳಿವೆ. ಉತ್ತರ ಕನ್ನಡ, ಶಿವಮೊಗ್ಗ, ದಕ್ಷಿಣ ಕನ್ನಡ ಎಂಬೀ ಜಿಲ್ಲೆಗಳೊಳಗಣ ಹವಿಕರ ಕನ್ನಡ ನುಡಿಯ ಶಬ್ದಗಳಲ್ಲಿ ವಾಕ್ಯಪ್ರಯೋಗಗಳಲ್ಲಿ ಆಂತರಿಕ ವ್ಯತ್ಯಾಸಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯೊಳಗಣ ಹವಿಕರಲ್ಲಿಯೂ ಕುಂಬಳೆ, ವಿಟ್ಲ, ಪುತ್ತೂರು, ಪಂಜ–ಎಂಬ ಸೀಮೆಗಳಿಗನುಗುಣವಾಗಿ ಮಾತಿನ ವ್ಯತ್ಯಾಸಗಳು ಕಂಡು ಬರುತ್ತಿವೆ. ಹಾಗೆಯೇ ಇತರ ಜಿಲ್ಲೆಗಳ ಒಳಗಣ ಸೀಮೆಗಳಲ್ಲಿ ವ್ಯತ್ಯಾಸ ಗಳಿರುವುದು ಸಹಜ.

ಕನ್ನಡದ ಗ್ರಾಂಥಿಕ ಭಾಷೆಗೆ ಉಪಯುಕ್ತವಾಗುವ ಶಬ್ದಸಂಪತ್ತನ್ನೂ ಭಾವಶಕ್ತಿಯನ್ನೂ ಅರ್ಥಸಾಮರ್ಥ್ಯವನ್ನೂ ಸೊಗಸಾದ ನುಡಿಗಟ್ಟುಗಳನ್ನೂ

---

1 ಕವಿರಾಜಮಾರ್ಗ, ೧-೪೬.

ಗಾದೆಗಳನ್ನೂ ತನ್ಮೂಲಕ ಜನಜೀವನದ ಯೋಗ್ಯ ಅನುಭವಗಳನ್ನೂ ಈ ಹವ್ಯಕಭಾಷೆ ಒದಗಿಸಬಲ್ಲುದು. ಆದುದರಿಂದ ಇದರ ಅಧ್ಯಯನ ಎಲ್ಲ ಕನ್ನಡಿಗರಿಗೂ ಉಪಯೋಗಕರ ಈ ಭಾಷೆಯ ಸೊಗಸನ್ನು ಕಂಡ ಹಲವರು ವಿದ್ವಾಂಸರು ತಮ್ಮ ಗ್ರಂಥಗಳಲ್ಲಿ ಈ ಕಡೆಗೆ ಭಾಷಾಕುತೂಹಲಿಗಳ ಅವಧಾನವನ್ನು ಸೆಳೆದಿದ್ದಾರೆ. ಶ್ರೀ ಶಂ. ಬಾ. ಜೋಶಿ ಅವರ ಮಾತುಗಳಿವು—

"ಇವರ ಮನೆಮಾತು ನೃಪತುಂಗನ ಕಾಲಕ್ಕೂ ಹಿಂದೆ ಇದ್ದ ಹಳಗನ್ನಡ. ಪ್ರಾಚೀನ ಕಾಲದ ತಮ್ಮ ಭಾಷೆಯನ್ನು ಇವರು ಕಾದುಕೊಂಡು ಬಂದಿದ್ದಾರೆ. ಹವ್ಯಕರ ಹೊರತು ಬೇರೆ ಯಾವ ಜನಾಂಗದವರೂ ತತ್ಸದೃಶವಾದ ಭಾಷೆಯನ್ನಾಡುವುದಿಲ್ಲ."[2]

ಶ್ರೀಯುತ ಮಾಸ್ತಿಯವರು ಹೀಗೆಂದಿದ್ದಾರೆ:

"ಬೇರೆ ಎನ್ನಿಸುವ ಕನ್ನಡ ಒಂದಿದೆ. ಅದನ್ನು ಹವ್ಯಕರು ಆಡುತ್ತಾರೆ. ಅದು ಹಳಗನ್ನಡದ ರೂಪಗಳನ್ನು ಉಳಿಸಿಕೊಂಡು ಈಗಿನ ಕಾಲಕ್ಕೆ ಪ್ರತ್ಯೇಕವೆಂಬಂತೆಯೇ ಇದೆ"[3]

ಡಾ॥ ರಂ. ಶ್ರೀ. ಮುಗಳಿಯವರೂ ಹವ್ಯಕರ ಕನ್ನಡದ ವೈಶಿಷ್ಟ್ಯವನ್ನು ಕಂಡಿದ್ದಾರೆ. ಅವರ ಮಾತುಗಳಿವು—

"ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡ ಈ ಎರಡೂ ಜಿಲ್ಲೆಗಳಲ್ಲಿ ಹವ್ಯಕ ಭಾಷೆ ಬಳಕೆಯಲ್ಲಿದೆ. ಹಳಗನ್ನಡದ ಅವಶೇಷಗಳು ಇದರಲ್ಲಿ ಎದ್ದು ಕಾಣುತ್ತವೆ."[4]

ಕನ್ನಡ ಭಾಷೆಯ ಇಂತಹ ಬಹುಮುಖಗಳನ್ನು ಅಭ್ಯಾಸ ಮಾಡುವ ಆವಶ್ಯಕತೆಯ ವಿಚಾರವಾಗಿ ಡಾ॥ ವಿ. ಕೆ. ಗೋಕಾಕರು ಹೇಳಿರುವ ಮನನೀಯ ವಾಕ್ಯಗಳು ಇಂತಿವೆ—

"ಇಂದಿನ ಕನ್ನಡ ಭಾಷೆಯಲ್ಲಿ ಸಹ ಅನೇಕ ಪ್ರಕಾರಗಳಿವೆ. ಒಂದೊಂದು ಜಿಲ್ಲೆಯ ಕನ್ನಡದ ಬಳಕೆಯೂ ಒಂದೊಂದು ಗ್ರಂಥದ ಸಾಮಗ್ರಿಯಾಗಿ ಕಾದು ಕುಳಿ

---

2 ಕಣ್ಮರೆಯಾದ ಕನ್ನಡ, ಪುಟ ೯೧,

3 ಡಾ॥ ಮಾಸ್ತಿ—ನಮ್ಮ ನುಡಿ, ಪುಟ ೨೭–೨೮

4 ಡಾ॥ ರಂ. ಶ್ರೀ. ಮುಗಳಿ—ಕನ್ನಡ ಸಾಹಿತ್ಯದ ಇತಿಹಾಸ (೧೯೬೩) ಪುಟ ೧೦.

ಶಿದೆ. ಈ ಎಲ್ಲ ಕನ್ನಡಗಳನ್ನು ಕುರಿತು ಬರೆಯುವುದು ಅಗತ್ಯವಾಗಿದೆ. ಹಳ್ಳಿಗನ್ನಡ, ಬಳಕೆಗನ್ನಡಗಳು ನಾಡಿನಲ್ಲಿ ಬೇರೆಬೇರೆ ರೂಪವನ್ನು ತಾಳುತ್ತಿವೆ. ಇಂದಿನ ಗ್ರಂಥಸ್ಥ ಕನ್ನಡಕ್ಕೆ ಇವು ಬಣ್ಣಬಣ್ಣವನ್ನು ತರುತ್ತವೆ- ಇವುಗಳ ತುಲನಾತ್ಮಕ ಅಭ್ಯಾಸವೂ ಅಗತ್ಯ- ಕೆಲವು ಜನ ತರುಣ ಅಭ್ಯಾಸಿಗಳು ತಮ್ಮ ಜೀವನವನ್ನು ಮೀಸಲಾಗಿಡ ಬೇಕಾಗಿದೆ ಇಂತಹ ಕಾರ್ಯಕ್ಕೆ."[5]

ಕನ್ನಡ ಭಾಷೆಯ ಮತ್ತು ಕನ್ನಡ ಭಾಷಾಶಾಸ್ತ್ರದ ಅಧ್ಯಯನಕ್ಕೆ ಉಪಯುಕ್ತವಾಗುವ ಹವ್ಯಕ ಭಾಷೆಯ ಕೆಲವು ಲಾಕ್ಷಣಿಕ ವೈಶಿಷ್ಟ್ಯಗಳನ್ನು ತಿಳಿಸಬಹುದು. ದಕ್ಷಿಣ ಕನ್ನಡ ಜಿಲ್ಲೆಯ (ಕಾಸರಗೋಡು ವರೆಗಿನ) ಹವಿಕರ ಕನ್ನಡವನ್ನು ಸ್ಥೂಲವಾಗಿ ಇಲ್ಲಿ ಲಕ್ಷ್ಯವಿಟ್ಟಿದೆ—

(೧) ಭಾಷಾಶಾಸ್ತ್ರಜ್ಞರು ದ್ರಾವಿಡ ಭಾಷೆಯ ವಿಶೇಷ ಲಕ್ಷಣವನ್ನು ಹೇಳುತ್ತ, ಇದರಲ್ಲಿ ಉತ್ತಮ ಪುರುಷ ಸರ್ವನಾಮದ ಬಹುವಚನಕ್ಕೆ ಎರಡು ರೂಪಗಳಿವೆ–ಎನ್ನುತ್ತಾರೆ. ಮಧ್ಯಮಪುರುಷ ಸೇರಿರುವುದು ಮತ್ತು ಸೇರದೆ ಇರುವುದು–ಎಂಬಿವೇ ಆ ಎರಡು ರೂಪಗಳು. ಹಳಗನ್ನಡದಲ್ಲಾಗಲೀ ಹೊಸಗನ್ನಡದಲ್ಲಾಗಲೀ ಈ ಎರಡು ರೂಪಗಳ ಸರ್ವನಾಮವಿಲ್ಲ. ಆದರೆ, ಹವಿಕರ ಕನ್ನಡದಲ್ಲಿದೆ. ಉದಾ :—

**ಮಧ್ಯಮಪುರುಷ ಸೇರಿದ ಉತ್ತಮ ಪುರುಷ ಬಹುವಚನ:—**

| **ಹವಿಕ** | **ಹಳಗನ್ನಡ** | **ಹೊಸಗನ್ನಡ** |
|---|---|---|
| ನಾವು ಹೋಪೊಂ | ಆಂ ಪೋಪಂ | ನಾವು ಹೋಗುವ (ನಾವು ಹೋಗೋಣ) |

ಮಧ್ಯಮಪುರುಷ ಬಿಟ್ಟು ಉತ್ತಮಪುರುಷ ಬಹುವಚನ:—

ಎಂಗೊಂ ಹೋವುತ್ತೆಯೊಂ ("ಎಂಗೊಂ" ಎಂಬುದು ಹವಿಕರ ಮಾತಿನಲ್ಲಿ ಮಾತ್ರ ಇದೆ.)

---

5 ಡಾ॥ ವಿ. ಕೆ. ಗೋಕಾಕ—ನವ್ಯತೆ ಹಾಗೂ ಕಾವ್ಯಜೀವನ (೧೯೫೫) ಪುಟ ೭.

(೨) ಸ್ತ್ರೀಲಿಂಗದ ಏಕವಚನಕ್ಕೆ ನಪುಂಸಕಲಿಂಗದ ಏಕವಚನದ ಪ್ರಯೋಗವಿದೆ—

| ಹವಿಕ | ಹೊಸಗನ್ನಡ |
| --- | --- |
| ಅಕ್ಕ ಬಂತು | ಅಕ್ಕ ಬಂದಳು |
| ತಂಗೆ ಬಯಿಂದು | ತಂಗಿ ಬಂದಿದ್ದಾಳೆ (ಬಂದಿದ್ದಳು) |
| ಅಬ್ಬೆ ಇದ್ದು | ತಾಯಿ ಇದ್ದಾಳೆ. |

ಶಬ್ದಮಣಿದರ್ಪಣದಲ್ಲಿ ಲಕ್ಷ್ಮಿ, ಸರಸ್ವತಿ ಮುಂತಾದ ಸ್ತ್ರೀದೇವತೆಗಳಿಗೆ ಏಕವಚನದಲ್ಲಿ ನಪುಂಸಕಲಿಂಗದ ಪ್ರಯೋಗವನ್ನೂ ಹೇಳಿದೆ. ಆದರೆ ಇದು ಹೊಸಗನ್ನಡದಲ್ಲಿಲ್ಲ ಹವಿಕರ ಭಾಷೆಯಲ್ಲಿ ಉಳಿದುಕೊಂಡಿದೆ. ತೆಲುಗಿನಲ್ಲಿ ಇಂದಿಗೂ ಸ್ತ್ರೀಲಿಂಗದ ಏಕವಚನಕ್ಕೆ ನಪುಂಸಕ ಏಕವಚನವೇ ಪ್ರಯೋಗವಾಗುತ್ತಿದೆ.

ಸ್ತ್ರೀವಾಚಕವಾಗಿರುವ ಪುಲ್ಲಿಂಗದ ಏಕವಚನದಲ್ಲಿ ಸ್ತ್ರೀಪ್ರತ್ಯಯವಿದೆ—

ಉದಾ :—

ಹೋದೋಳು (ಹೋದವಳು)

ಬಂದೋಳು (ಬಂದವಳು)

ಹೀಗಿದ್ದರೂ ಸ್ತ್ರೀಲಿಂಗದ ಬಹುವಚನವು ನಪುಂಸಕಲಿಂಗದ ಬಹುವಚನವೇ ಆಗಿರುತ್ತದೆ—

ಹೋದೋವು (ಹೋದವುಗಳು, ಹೋದ ಸ್ತ್ರೀಯರು)

ಬಂದೋವು (ಬಂದವುಗಳು, ಬಂದ ಸ್ತ್ರೀಯರು)

(೩) ಅಕಾರಾಂತ ಸ್ತ್ರೀಲಿಂಗದ ವಿಭಕ್ತಿಪ್ರತ್ಯಯಗಳು ಪುಲ್ಲಿಂಗದಂತೆಯೇ ಇರುತ್ತವೆ—

ಕಮಲ, ಕಮಲನ, ಕಮಲಂದ, ಕಮಲಂಗೆ, ಕಮಲನ, ಕಮಲನಲ್ಲಿ. ಕನ್ನಡದಲ್ಲಿ ಅಕ್ಕ, ಅವ್ವ, ಅಮ್ಮ–ಎಂಬ ಶಬ್ದಗಳಿಗೆ ಪುಲ್ಲಿಂಗಪ್ರತ್ಯಯಗಳಿಂದೇ ಶಬ್ದಮಣಿದರ್ಪಣವು ಹೇಳುತ್ತದೆ. ಹವಿಕರ ಕನ್ನಡದಲ್ಲಿ ಅವ್ವ, ಅಮ್ಮ ಎಂಬಿವುಗಳ ಸ್ಥಾನದಲ್ಲಿ 'ಅಬ್ಬೆ' ಎಂಬ ಶಬ್ದವಿದೆ.)*

(೪) ಅಕಾರಾಂತ ಪುಲ್ಲಿಂಗ–ಸ್ತ್ರೀಲಿಂಗ ಶಬ್ದಗಳಿಗೆ ಪ್ರಥಮಾವಿಭಕ್ತಿಯ ಪ್ರತ್ಯಯವಾಗಿ ಅರ್ಧಾನುಸ್ವಾರವಿದೆ—

ಅವ, ರಾಮ, ಶಂಕರ, ಅಕ್ಕ, ಮಾವ, ಇತ್ಯಾದಿ.

[ವ್ಯಾಕರಣಕಾರರು ಪ್ರಥಮಾವಿಭಕ್ತಿ ಪ್ರತ್ಯಯವಾಗಿ ಹೇಳುವ ಬಿಂದುವಿಗೆ ಇದು ಪೂರ್ವರೂಪವಿರಬಹುದು.]

(೫) ಅಕಾರಾಂತ ನಪುಂಸಕಲಿಂಗದ ಮತ್ತು ಅಕಾರಾಂತವಲ್ಲದ ಎಲ್ಲಾ ಲಿಂಗಶಬ್ದಗಳ ಪ್ರಥಮಾವಿಭಕ್ತಿಗೆ ವಿಭಕ್ತಿಸಂಜ್ಞಕ ಧ್ವನಿಯಿಲ್ಲ–

ಉದಾ :–

ಅಕಾರಾಂತ ನಪುಂಸಕಲಿಂಗ–ಮರ, ನೆಲ, ಪುಸ್ತಕ ಇತ್ಯಾದಿ.

ಅಕಾರಾಂತವಲ್ಲದ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗ ಶಬ್ದಗಳು— ಗುರು, ಹರಿ; ಸೀತೆ, ಪಾರ್ವತಿ; ಹೊಳೆ, ಎಲಿ (ಇಲಿ) ಇತ್ಯಾದಿ.

[ಇಂಥವಕ್ಕೆಲ್ಲ ಪ್ರಥಮಾ ವಿಭಕ್ತಿಯ ಪ್ರತ್ಯಯವು ಲೋಪವಾಗುತ್ತದೆಂದು ಹೇಳಬಹುದು.]

(೬) ಪುಲ್ಲಿಂಗ–ಸ್ತ್ರೀಲಿಂಗಗಳಲ್ಲಿ ದ್ವಿತೀಯೆಯ ಮತ್ತು ಷಷ್ಠಿಯ ವಿಭಕ್ತಿರೂಪಗಳು ಒಂದೇ ರೀತಿ :––

---

* ಇಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಹವಿಕರಲ್ಲಿ–ಎಂದು ತಿಳಿದುಕೊಳ್ಳಬೇಕು.

**ದ್ವಿತೀಯೆ**— ರಾಮನ, ಗಣಪತಿಯ, ಸೀತೆಯ
**ಷಷ್ಠಿ**— ರಾಮನ, ಗಣಪತಿಯ, ಸೀತೆಯ.

ವಾಕ್ಯದಲ್ಲಿ ಪ್ರಯೋಗ :—

ರಾಮನ ದೆನಿಗೇಳು (ರಾಮನನ್ನು ಕರೆ)–ಇದು ದ್ವಿತೀಯಾವಿಭಕ್ತಿ.

ರಾಮನ ತಮ್ಮ ಲಕ್ಷ್ಮಣ —ಇಲ್ಲಿ ಷಷ್ಠಿ.

ಅಕಾರಾಂತ ನಪುಂಸಕಲಿಂಗದಲ್ಲಿ ದ್ವಿತೀಯೆ ಷಷ್ಠಿಗಳ ರೂಪವು ಬೇರೆ ಬೇರೆಯಾಗಿದೆ. ಉದಾ :

ಮರವ ಕಡಿ (ಮರವನ್ನು ಕಡಿ) ಇಲ್ಲಿ ದ್ವಿತೀಯೆ.
ಮರದ ಗೆಲ್ಲು (ಮರದ ಕೊಂಬೆ) ಇಲ್ಲಿ ಷಷ್ಠಿ.

(೭) ಬಹುವಚನ ಪ್ರತ್ಯಯಗಳು "ಗೊ" ಮತ್ತು "ಕ್ಕೊ" ಎಂಬಿವು. (ಕನ್ನಡ ವ್ಯಾಕರಣದಲ್ಲಿ 'ಗಳ್' ಮತ್ತು 'ಕಳ್' ಎಂಬಿವನ್ನು ಹೇಳಿದೆ.)

ಉದಾ :—

| ಹವಿಕ | ಹಳಗನ್ನಡ | ಹೊಸಗನ್ನಡ |
|---|---|---|
| ಜನಂಗೊ | ಜನಂಗಳ್ | ಜನಗಳು. |
| ಮರಂಗೊ | ಮರಂಗಳ್ | ಮರಗಳು |
| ಹೆಮ್ಮಕ್ಕೊ | ಪೆಣ್ಮಕ್ಕಳ್ | ಹೆಣ್ಣು ಮಕ್ಕಳು ; ಹೆಂಗುಸರು |
| ಮಕ್ಕೊ | ಮಕ್ಕಳ್ | ಮಕ್ಕಳು |
| ನಿಂಗೊ | ನೀಂ (ನೀಂಗಳ್) | ನೀವು |
| ಎಂಗೊ | ನಾವು | ನಾವು |

(ಅ) ಹವಿಕರ ಕನ್ನಡದ ಶಬ್ದರೂಪಗಳಲ್ಲಿ ಕೆಲವು ಪೂರ್ವದ ಹಳಗನ್ನಡವನ್ನು ಹೋಲುವುದಾಗಿಯೂ ಕೆಲವು ಹಳಗನ್ನಡವಾಗಿಯೂ ಇನ್ನು ಕೆಲವು ಹೊಸಗನ್ನಡವಾಗಿಯೂ ಕಾಣಿಸುತ್ತವೆ. ಉದಾ :—

| ಪೂರ್ವದ ಹಳಗನ್ನಡ | ಹವಿಕ |
|---|---|
| ಬಂದಾನ್ | ಬಂದೋನು |
| ಸಂದಾನ್ | ಸಂದೋನು |

| ಹಳಗನ್ನಡ | ಹವಿಕ |
|---|---|
| ತಂಗೆ | ತಂಗೆ |
| ಅಬ್ಬೆ | ಅಬ್ಬೆ |
| ಕೂಸು | ಕೂಸು (= ವಿವಾಹ ಯೋಗ್ಯ ಕನ್ಯೆ) |
| ಇಲ್ಲೆ, ಇಲ್ಲೆಯೊ | ಇಲ್ಲೆ, ಇಲ್ಲೆಯೊ |
| ಎಸರು | ಎಸರು (ಅನ್ನಕ್ಕೆ ಇಟ್ಟ ನೀರು) |

ಉಚ್ಚಾರಣೆಯಲ್ಲಿ ಹಳಗನ್ನಡಕ್ಕೆ ಸಾಮ್ಯವುಳ್ಳ ಕೆಲವು ರೂಪಗಳು :—

| ಹವಿಕ | ಹಳಗನ್ನಡ | ಹೊಸಗನ್ನಡ |
|---|---|---|
| ಹೋಪಲೆ | ಪೋಪೊಡೆ | ಹೋಗಲು, ಹೋಗುವುದಕ್ಕೆ |
| ಹೋಪಲೆ ಹೇಳಿ<br>ಹೋಗಲೆ ಹೇಳಿ | ಪೋಗಲ್ವೇಡಿ | ಹೋಗುವುದಕ್ಕಾಗಿ. |
| ತಿಂಬೊ̐ | ತಿಂಬಂ | ತಿನ್ನುವ, ತಿನ್ನೋಣ. |
| ಅಕ್ಕು | ಅಕ್ಕುಂ | ಆಗಬಹುದು ; ಆಗುವುದು. |
| ಹೋಪೊ | ಪೋಪಂ | ಹೋಗುವ, ಹೋಗೋಣ. |

ಹೋದಾಡ
ಹೋದಾಡೊ
ಹೋದನಡ
} ಪೋದಂ ಗಡ ಹೋದನಂತೆ.

ಹೊಸಗನ್ನಡ ರೂಪದಲ್ಲಿರುವ ಹವಿಕ ಕನ್ನಡದ ರೂಪಗಳು :—

ಹಾಲು, ಹೇಳು, ಹಳತು, ಹೊಸತು (ಹೊಸತ್ತು—ಎಂತಲೂ ಹವಿಕರ ಕನ್ನಡದಲ್ಲಿದೆ.), ಹಿಳ್ಳೆ (ಈ ರೂಪವು ಹೊಸಗನ್ನಡದಲ್ಲಿಲ್ಲ. ಹಳಗನ್ನಡದಲ್ಲಿರುವ 'ಪಿಳ್ಳೆ' ಎಂಬುದೇ ಹೊಸಗನ್ನಡ ರೂಪತಾಳಿದೆ. ಆದರೆ ಹವಿಕ ಭಾಷೆಯಲ್ಲಿ 'ಹಿಳ್ಳೆ' ಎಂದು 'ಶಿಶು' ಎಂಬ ಅರ್ಥದಲ್ಲಿ ಪ್ರಯೋಗವಾಗುತ್ತಿದೆ.)

(೯) ಹ್ರಸ್ವಪೂರ್ವವಾಗಿರುವ ಕೆಲವು ಶಬ್ದಗಳಿಗೆ ಕಕಾರಾದಿ ಶಬ್ದಗಳು ಸೇರಿ ಏಕಶಬ್ದವಾಗುವಾಗ ಆ ಕಕಾರಕ್ಕೆ ದ್ವಿತ್ವವು ಬರುತ್ತದೆ. ಉದಾ :—

ಹನಿಕ್ಕಾಲು (ಮಳೆ ನೀರು ಚಾವಣಿಯ ಮಾಡಿನಿಂದ ಕೆಳಬೀಳುವ ಸ್ಥಳ.)

ಮರಕ್ಕಾಲು (ಎರಡು ಉದ್ದದ ದೊಣ್ಣೆಗಳಲ್ಲಿ ಕಾಲಿಡಲು ಸ್ಥಳಮಾಡಿ, ಅವನ್ನೇ ಕಾಲುಗಳಾಗಿ ನಡೆಯಲು ಆಟಕ್ಕೆ ಉಪಯೋಗಿಸುವುದುಂಟು. ಅಂತಹ ಮರಕ್ಕೆ 'ಮರಕ್ಕಾಲು' ಎನ್ನುತ್ತಾರೆ.)

ನೊರೆಕ್ಕಾಯಿ (ಅಂಟವಾಳದ ಕಾಯಿ.)
ಸೊರೆಕ್ಕಾಯಿ (ಸೋರೆಕಾಯಿ.)
ಗುರಿಕ್ಕಾರ (ಗ್ರಾಮದಲ್ಲಿ ಸಾಮಾಜಿಕ ಮುಖ್ಯಸ್ಥ.)
ಮೊಳಕ್ಕಾಲು (ಕಾಲ ಮೊಣಗಂಟಿನ ವರೆಗಿನ ಕಾಲು.)
ಮೊಳಕ್ಕೈ (ಕೈಮೊಣಗಂಟಿನ ವರೆಗಿನ ಕೈ.)
ಹಸೆಕ್ಕರೆ (ಹಸೆಗೆ ಕರೆ) ಉದಾ :— ಹಸೆಕ್ಕರೆವ ಹಾಡು.
ಮದಕ್ಕರಿ (ಒಂದು ಬಗೆಯ ಕುಷ್ಟವ್ಯಾಧಿ.)
ಮಡಿಕ್ಕೇರಿ, ಸರಕ್ಕಾರ, ತಲೆಕ್ಕಾವೇರಿ, ಕುಡಿಕ್ಕೆ (ಕುಡಿಕೆ),
ಒಳಕ್ಕೈ (ಲಾಭದ ಗಳಿಕೆ), ಬಲಿಕ್ಕೆ (ಮೆತ್ತಗಲ್ಲದ.)

ಒಣಕ್ಕೆ (ಒನಕೆ.)
ಮುನೆಕ್ಕಾವು
ಮೊನೆಕ್ಕಾವು } (ಇಕ್ಕಳ)

[ಕನ್ನಡದ ವ್ಯಾಕರಣ ಪ್ರಕಾರ ಮರಕ್ಕೆ, ಜನಕ್ಕೆ- ಎಂಬ ಅಕಾರಾಂತಗಳ ಎರಡು ಹ್ರಸ್ವಗಳನಂತರ ಬರುವ ಕಕಾರಾದಿಯ ವಿಭಕ್ತಿ ಪ್ರತ್ಯಯಕ್ಕೆ ದ್ವಿತ್ವ ಬರಲು ಇದೇ ಪ್ರಭಾವವಿರಬಹುದೆ?]

ತಮಿಳಿನಲ್ಲಿ ಕೋಟ್ಕ್ಕೂಸು (ಕೋಳಿಮರಿ,) ಪಶುಕ್ಕಾವಲ್ (ಪಶು ಪಾಲನೆ) ಎಂಬ ದ್ವಿತ್ವ ರೂಪಗಳಿವೆ. ತುಳುವಿನಲ್ಲಿ ಇದೇ ಬಗೆಯಾಗಿ ನೊರೆಕ್ಕಾಯಿ, ತುರ್ಕೆಕಾಯಿ–ಎಂಬಲ್ಲೆಲ್ಲ ದ್ವಿತ್ವವಿದೆ. ತುಳು–ಹವಿಕ ಭಾಷೆಗಳ ಕೆಲವು ಸ್ಥಳವಾಚಕಗಳಲ್ಲಿ ಕಕಾರವಲ್ಲದೆಡೆಯಲ್ಲಿಯೂ ಈ ಬಗೆಯ ದ್ವಿತ್ವವಿದೆ :—

ಕೋಡಿಚ್ಚಾಲು, ಓಂತಿಚ್ಚಾರು, ಕುಪ್ಪುಚ್ಚಾರು, ಪಾರೆಕ್ಕೋಡಿ-- ಇತ್ಯಾದಿ.

(೧೦) ಹ್ರಸ್ವ ವ್ಯಂಜನದ ಮುಂದೆ **'ತನ'** **'ಿಕೆ'** ಎಂಬ ತದ್ಧಿತ ಪ್ರತ್ಯಯಗಳು ಬಂದಾಗ ವ್ಯಂಜನದ ಸಕಾರವು ಸೇರಿಕೊಳ್ಳುತ್ತದೆ. ಉದಾ :—

ಬಡಸ್ತನ, ಬಡಸ್ತಿಕೆ; ನಂಟಸ್ತನ, ನಂಟಸ್ತಿಕೆ; ದೊಡ್ಡಸ್ತನ, ದೊಡ್ಡಸ್ತಿಕೆ–ಇತ್ಯಾದಿ.

ಪ್ರತ್ಯಯವಿಲ್ಲದಲ್ಲಿಯೂ ಕ್ವಚಿತ್ಪ್ರಯೋಗವಿದೆ—ಉದಾ :—ಕಸ್ತಲೆ (= ಕತ್ತಲೆ), ಮೆಸ್ತಂಗೆ (= ಮೆತ್ತಗೆ).

(೧೧) ಆಗು, ಹೋಗು ಎಂಬ ಧಾತುಗಳು ಕ್ರಿಯಾಪದ (ಆಖ್ಯಾತ ಪದ) ಗಳಾದಾಗ ಮಧ್ಯಗತವಾದ ಆ ಗಕಾರಕ್ಕೆ ಯಕಾರ ಅಥವಾ ವಕಾರವು ಬರುತ್ತದೆ. ಉದಾ :—

| **ಹವಿಕ** | **ಕನ್ನಡ** |
|---|---|
| ಆಯಿದು | ಆಗಿದೆ |
| ಆವುತ್ತು | ಆಗುವುದು |
| ಹೋಯಿದ | ಹೋಗಿದ್ದಾನೆ; |
| ಹೋಯಿದು | ಹೋಗಿದೆ, ಹೋಗಿದ್ದಾಳೆ |
| ಹೋವುತ್ತೆ | ಹೋಗುತ್ತೇನೆ, ಹೋಗುತ್ತಿ |

ಇವಲ್ಲದೆ "ಹೂವು" ಎಂಬುದು ಹವಿಕ ಕನ್ನಡದಲ್ಲಿ "ಹೂಗು" ಆಗಿದೆ.

ಹೀಗೆ ಮಧ್ಯಗತ 'ವ'ಕಾರವು 'ಗ'ಕಾರವಾಗುವ ಪ್ರವೃತ್ತಿ ತಮಿಳು ತೆಲುಗುಗಳಲ್ಲಿಯೂ ಇದೆ. ಆ ಕುರಿತು ಕಾಲ್ಡ್‌ವೆಲರ ಮಾತಿದು :--

"க்" When used as sonant—that is as "ग्" -changes into "व्". Where we have "ग्" in Tamil, we sometimes find व् in Telugu— e. g. ஆகு Tam. to become ; అవు, Tel.[7]

ಕನ್ನಡದಲ್ಲಿ ಕೆಲವು ಶಬ್ದಗಳ 'ಗ'ಕಾರವು 'ವ'ಕಾರವಾದುದಕ್ಕೆ ಉದಾಹರಣೆಗಳಿವೆ—ತೊಗೆ-ತೊವೆ; ತೊಗಲು-ತೊವಲು ; ಸೊವಡು-ಸೊಗಡು ಇತ್ಯಾದಿ. ಹವಿಕರ ಕನ್ನಡದಲ್ಲಿ ಇಂತಹ ಪರಿವರ್ತನೆಗೆ ಉದಾಹರಣೆಗಳಿವೆ ಯೆಂಬುದು ಸ್ಪಷ್ಟವಾಗಿದೆ.

ಹಳಗನ್ನಡ ಕಾವ್ಯಗಳಲ್ಲಿ ಕ್ವಚಿತ್ತಾಗಿ ಗೋಚರಿಸುವ ಉದ್ದೇಶಾರ್ಥಕ ಪ್ರತ್ಯಯವಾಗಿರುವ 'ಅಲೆ' ಸೇರಿದ ಕ್ರಿಯೆ ಹವಿಕರ ಭಾಷೆಯಲ್ಲಿ ಬಹಳವಾಗಿ ಪ್ರಯೋಗವಾಗುತ್ತದೆ. ಉದಾ :--ಉಡಲೆ†, ಉಂಬಲೆ, ಬೇಡಲೆ (ಉಡಲ್, ಉಣ್ಣಲ್, ಬೇಡಲ್ ಎಂಬ ಅರ್ಥಗಳುಳ್ಳವು).

---

7 Caldwell— Comparative Grammar of Dravidian Languages, page 151.

† ನೇಮಿಚಂದ್ರನ ನೇಮಿನಾಥ ಪುರಾಣ :(ಆ. ೮, ಪದ್ಯ ೭೭) ದಲ್ಲಿ 'ಉಡಲೆ' ಎಂಬುದು 'ಉಡುವುದಕ್ಕಾಗಿ' ಎಂಬ ಅರ್ಥದಲ್ಲಿ ಬಂದಿದೆ.

(೧೨) ಕ್ರಿಯಾಪದದ ವಿಧಿರೂಪದಲ್ಲಿ ಆಗ್ರಹಸೂಚಕವೆನಿಸುವದೊಂದು ಪ್ರಯೋಗವಿದೆ. ಇದು ಉತ್ತಮ ಪುರುಷಕ್ಕೂ ಅನ್ವಯಿಸುವುದು ಹವಿಕ ಭಾಷೆಯ ವೈಶಿಷ್ಟ್ಯ. ಉದಾ :--

**ಪ್ರಥಮ ಪುರುಷ** :—ಅವ ಓದಿಕ್ಕಲಿ, ಅದು ಓದಿಕ್ಕಲಿ (Let him/her read)

**ಮಧ್ಯಮ ಪುರುಷ** :--ನೀನು ಓದಿಕ್ಕು, ನಿಂಗೊ ಓದಿಕ್ಕಿ (You please read)

**ಉತ್ತಮ ಪುರುಷ** :—ಆನು ಓದಿಕಿತೆ, ಆನು ಓದಿಕ್ಕಿತೆ (Let me read)

ಮಧ್ಯಮ ಪುರುಷ ಸಹಿತವಾದ ಉತ್ತಮ ಪುರುಷ ಬಹುವಚನ :—

ನಾವು ಓದಿಕ್ಕಿವೊ (Let us read)

ಮಧ್ಯಮ ಪುರುಷ ರಹಿತವಾದ ಉತ್ತಮ ಪುರುಷ ಬಹುವಚನ :—

ಎಂಗೊ ಓದಿಕಿತೆಯೊ

ಎಂಗೊ ಓದಿಕ್ಕಿತೆಯೊ

[ತುಳು ಭಾಷೆಯಲ್ಲಿ ಈ ರೀತಿಯ ಪ್ರಯೋಗಗಳಿವೆ. ಆದರೆ ಪ್ರಚಲಿತವಾದ ಕರ್ನಾಟ ಭಾಷೆಯಲ್ಲಿ ಕಾಣುವುದಿಲ್ಲ. ಅಲ್ಲಿ 'ಆನು ಓದಿಕಿತೆ' ಎಂಬುದನ್ನು "ನಾನು ಓದಿಬಿಡುತ್ತೇನೆ" ಎಂದು ಹೇಳಬೇಕಾದೀತು. ಅದು 'Let me read' ಎಂಬುದರ ಪೂರ್ಣಭಾವವನ್ನು ಕೊಡಲಾರದು.]

* * * * *

ಕನ್ನಡದ ಭಾಷಾ ಶಾಸ್ತ್ರಕ್ಕೆ ಹವಿಕರ ಭಾಷೆಯ ಕೊಡುಗೆಯೇನೆಂಬುದಕ್ಕೆ ಕೆಲವು ವಿಶೇಷ ಶಬ್ದಗಳ ಉದಾಹರಣೆಗಳಿವು :—

೧ **ಅಪ್ಪಚ್ಚಿ** (= ಚಿಕ್ಕಪ್ಪ ; ಚಿಕ್ಕಮಕ್ಕಳಿಗಾಗಿ ಮಾಡಿದ ದೋಸೆ ಅಥವಾ ಕಡುಬು)

ಇಲ್ಲಿ 'ಅಚ್ಚಿ' ಎಂಬುದು 'ಚಿಕ್ಕದು' ಎಂಬ ಅರ್ಥ ಕೊಡುತ್ತದೆ. ಅಪ್ಪನಿಗಿಂತ ಚಿಕ್ಕವನು ಚಿಕ್ಕಪ್ಪ. ಹಾಗೆಯೆ ಚಿಕ್ಕವರಿಗಾಗಿ ಇರತಕ್ಕ 'ಅಪ್ಪ' (= ಕಡುಬು) 'ಅಪ್ಪಚ್ಚಿ' ಎನಿಸುವುದು. ಕನಕದಾಸರ ಮೋಹನ ತರಂಗಿಣಿಯಲ್ಲಿ 'ಚಿಕ್ಕಪ್ಪ' ಎಂಬ ಅರ್ಥದಲ್ಲಿ 'ಚಿಪ್ಪ' (ಚಿ =ಚಿಕ್ಕ, ಪ್ಪ =ಅಪ್ಪ, ತಂದೆ) ಎಂಬ ಶಬ್ದ ಬಂದಿದೆ.

೨ **ಅವು** (= ದೋಸೆ ಅಥವಾ ವಿಶೇಷ ಭಕ್ಷ್ಯ).

ಈ ಶಬ್ದಕ್ಕೆ ಕೆಲವು ವಿಶೇಷಣಗಳನ್ನು ಸೇರಿಸುವುದರಿಂದ ಇನ್ನೂ ಕೆಲವು ರೀತಿಯ ದೋಸೆ-ತಿಂಡಿಗಳಾಗುತ್ತವೆ. ಉದಾ :—

ತೆಳ್ಳವು (=ತೆಳುದೋಸೆ), ತೊಡೆದವು (ಒಲೆಗೆ ಕವಚಿಟ್ಟ ಮಡಕೆಗೆ ಹಿಟ್ಟನ್ನು ತೊಡೆದು (=ಸವರಿ) ಮಾಡುವಂಥದು- ಇದು ಶಿವಮೊಗ್ಗದ ಕಡೆ ಹವಿಕರಲ್ಲಿ ಹೆಚ್ಚಾಗಿ ರೂಢಿಯಲ್ಲಿದೆ.). 'ಅವು' ಎಂಬುದಕ್ಕೆ 'ತನ' ಎಂಬ ಪ್ರತ್ಯಯ ಸೇರಿ, 'ಅವುತನ' ವಾಗುವುದಷ್ಟೆ. ರೂಢಿಯಲ್ಲಿ ಇದು 'ಅವುತಣ, ಔತಣ' ಆಗಿ ವ್ಯುತ್ಪತ್ತಿಯನ್ನು ಮರೆಗೊಳಿಸಿದೆ. ಆದರೆ ಹವಿಕರ ಭಾಷೆಯಿಂದ ಅದರ ವ್ಯುತ್ಪತ್ತಿ ಪ್ರಕಟವಾಗುತ್ತದೆ.

೩. **ಎಸಮುಚ್ಚೆಲು** (=ಎಸರ್ಮುಚ್ಚೆ)

ಅನ್ನಕ್ಕಿಟ್ಟ ನೀರಿಗೆ ಮುಚ್ಚುವ ಮರದ ಅಥವಾ ಲೋಹದ ತಟ್ಟೆಯಿದು. ಅನ್ನದ ತಿಳಿಯನ್ನು ಬಸಿಯುವುದಕ್ಕೂ ಉಪಯೋಗಿಸುತ್ತಾರೆ. 'ಎಸರ್ಮುಚ್ಚೇಲು' ಎಂಬುದೇ 'ಎಸಮುಚ್ಚೆಲು' ಆಗಿದೆ. ಹವಿಕಭಾಷೆಯಲ್ಲಿ ಎಲು, ಏಲು-ಎಂಬೀ ತದ್ಧಿತ ಪ್ರತ್ಯಯಗಳು ಅರ್ಹವಾದ, ಸ್ವಭಾವವನ್ನುಳ್ಳ-ಎಂಬ ಅರ್ಥಗಳಲ್ಲಿ ಬರುತ್ತವೆ. ಉದಾ :— ಓದೇಲು (ಓದುವ ಸ್ವಭಾವವುಳ್ಳ), ಜಾರೇಲು (ಜಾರುವ ಗುಣವುಳ್ಳ) ; ಇದರಂತೆ 'ಮುಚ್ಚೇಲು' ಎಂದರೆ 'ಮುಚ್ಚಲು ಅರ್ಹವಾದುದು' ಎಂದು ಅರ್ಥ. ಪ್ರಚಲಿತವಾದ ಕನ್ನಡದಲ್ಲಿ

'ಮುಚ್ಚಳ' ಎಂಬ ಶಬ್ದವಿದೆ. ಇದು 'ಮುಚ್ಚೇಲು' ಎಂಬುದರಿಂದಲೇ ಬಂತೋ ಏನೋ! 'ಏಸಮುರ್ಚ್ಚಿ' ಎಂತ ರುದ್ರಭಟ್ಟನು ಜಗನ್ನಾಥ ವಿಜಯದಲ್ಲಿ ಪ್ರಯೋಗಿಸಿದ್ದಾನೆ— "ಆನೆ ಮೆಟ್ಟಿದೆಸಮುರ್ಚ್ಚಿವೊಲಾಗೆ ಕೂರ್ಮನೊಡೆದಂ." (ಆ. ೧-೩೦.)

### ೪. ಅರೆಮಡಲು (=ತಾಳೆಮರದ ಗರಿ)

'ಮಡಲು' ಎಂದು ತೆಂಗಿನ ಮರದ ಗರಿಗೆ ಹೆಸರು. ಅದು ಒಣಗಿದ್ದರೆ 'ಒಣ ಮಡಲು' ಎಂತಲೂ ಒಣಗದಿದ್ದರೆ 'ಹಸಿ ಮಡಲು' ಎಂತಲೂ ಹೇಳುತ್ತಾರೆ. 'ಅರೆ ಮಡಲು' ಗಾತ್ರದಲ್ಲಿ ತೆಂಗಿನ ಮಡಲಿನ ಅರ್ಧಾಂಶದಷ್ಟಿರಬಹುದು. ಆದರೆ, ಈ ಹೆಸರು ಅದರ ಗುಣವಾಚಕವಾಗಿಯೇ ಬಂದಿರಬೇಕು. ಅರ್-ಉಚ್ಚಧ್ವನಿಮಾಡು. ಈ ಮಡಲಿಗೆ ಗಾಳಿಸೋಂಕಿದರೆ ಸಾಕು, ಧ್ವನಿ ಮಾಡುತ್ತದೆ. ಇದನ್ನು ತಟ್ಟಿ ಬೇಲಿಗಳಿಗೆ ಬಿಗಿಯುವುದುಂಟು; ಆಗ ಹಸುಗಳಾಗಲಿ ಕಳ್ಳರಾಗಲಿ ನುಸುಳಿ ಬರುವಾಗ ಸ್ಪರ್ಶಮಾತ್ರದಿಂದಲೇ ಸದ್ದು ಉಂಟಾಗಿ ಕಾವಲುಗಾರರಿಗೆ ಕೇಳಿಸುವುದು. 'ಆರುವ ಮಡಲು' ಬರುತ್ತ ಅರೆ ಮಡಲಾಗಿರಬಹುದು, ಎನಿಸುತ್ತದೆ

### ೫. ಕಡಿಕ್ಕೆ (=ಕಣಜ)

"ಕಡಿ + ಇಕ್ಕೆ, ಇರ್ಕೆ" ಕಡಿಕ್ಕೆ ಆಗಿದೆ. ಕಡಿ (ಕಾಳುಕಡಿ) ಎಂದರೆ ಧಾನ್ಯ. ಬತ್ತ, ರಾಗಿ ಮುಂತಾದವನ್ನು ಶೇಖರಿಸಿ ಇಡುವ ಸಾಧನವಾಗಿ 'ಕಡಿಕ್ಕೆ' ಶಬ್ದವು ಸಾರ್ಥಕವಾಗಿದೆ. ತುಳುವಿನಲ್ಲಿ 'ಕದಿಕ್ಕೆ' ಎನ್ನುವರು, ಆಗ ಶಬ್ದದ ಅರ್ಥವು ಗೋಚರಿಸುವುಲ್ಲ.

### ೬. ತೆರೆಸೀರೆ (=ಪರದೆ)

"ತೆರೆ"ಯಾಗಿ ಉಪಯೋಗಿಸುವ ಸೀರೆ (=ವಸ್ತ್ರ) ಇದು. ಬಯಲಾಟಗಳಲ್ಲಿ ವೇಷವು ಮೊದಲ ಬಾರಿ ರಂಗಸ್ಥಳಕ್ಕೆ ಬರುವಾಗ ಕೆಲವು ವೇಷಗಳಿಗೆ 'ತೆರೆಸೀರೆ' ಹಿಡಿವ ಕ್ರಮವಿದೆ.

### ೭. ತೊಡವಣಿಕ (=ಮೊದಲ ಬಾರಿ ಕರುಹಾಕಿರುವ ಹಸು ಅಥವಾ ಎಮ್ಮೆ.)

ತೊಡಗು=ಪ್ರಾರಂಭಿಸು. ಮಣಿಕ, ಮಣಕ, ಮಾಣವಕ=ಕರು. ಶಿವಮೊಗ್ಗದ ಕಡೆಯ ಹವಿಕರಲ್ಲಿ ಇದನ್ನು "ಚೊಚ್ಚಲ ಮಣಕ" ಎನ್ನುತ್ತಾರೆ.

### ೮. ನೇವಾಳ (=ನೇವಳ)

ಈ ಶಬ್ದವು ಕಾವ್ಯಗಳಲ್ಲಿಯೂ ಬಂದಿದೆ. ಚಿನ್ನದ ಅಥವಾ ಬೆಳ್ಳಿಯ ಸರ-ಎಂದು ಕಿಟ್ಟೆಲರ ಕೋಶದಲ್ಲಿ ಇದಕ್ಕೆ ಅರ್ಥವಿದೆ. 'ಉಡಿದಾರ' ಎಂದೂ ಇದಕ್ಕೆ ಅರ್ಥ ಹೇಳುತ್ತಾರೆ. ನೇ (ನೇಯ್) ಎಂಬ ಧಾತುವಿನಿಂದ 'ನೇವ' ಕೃದ್ವಿಶೇಷಣದಿಂದ ಕೂಡಿದ ಆಳ (ಆಣ) ಎಂಬ ಶಬ್ದವಿದು. ಬೆಳ್ಳಿಯ ಅಥವಾ ಚಿನ್ನದ ಸರಿಗೆಗಳನ್ನು ನೆಯ್ದು ಮಾಡಿರುವ ದಪ್ಪದ ದಾರವೇ ನೇವಳ. ಇದಕ್ಕೆ ಪವನನ್ನೋ ರೂಪಾಯಿ ನಾಣ್ಯವನ್ನೋ ಜೋಡಿಸಿ ಕೊರಲಿಗೂ ಆಭರಣವಾಗಿ ಮಾಡುವುದುಂಟು "ಆಣ (ಆಣೆ)" ಎಂಬುದು ಪರೌಲ್ಯವುಳ್ಳ ಲೋಹದ ವಸ್ತು. ಆಭರಣ' ಎಂಬ ಅರ್ಥದಲ್ಲಿಯೂ ಬಂದಿದೆ. ಹರಿವಾಣ, ತಾಂಬಾಣ, ದಬ್ಬಣ, ಒಡ್ಯಾಣ (ಉಡಿಯಾಣ)- ಇತ್ಯಾದಿಗಳ ವ್ಯುತ್ಪತ್ತಿಯನ್ನರಿಯಲು 'ನೇವಾಳ' ಶಬ್ದ ಸಹಾಯಕ ವಾಗುವುದು

### ೯. ಪಿಜುರು (=ಹಿಂದಕ್ಕೆ ತಿರುಗು)

ಇದು "ಪಿಂ=ಹಿಂದಕ್ಕೆ; ಜುರು (ಗು)=ಸರಿ, ತಿರುಗು-ಎಂಬುದರಿಂದ ರೂಪಿತವಾಗಿದೆ.

### ೧೦. ಉಪ್ಪರಟೆ, ಉಪ್ರಟೆ (=ತಲೆ ಕೆಳಗಾಗಿ, ಒಂದಕ್ಕೊಂದು)

ಉಪ್ಪರ=ಮೇಲೆ, ಅಟೆ=ಅಡಿ, ಕೆಳಗೆ. ಈಗ ಇದರ ಅರ್ಥವು ಸ್ಪಷ್ಟ ವಾಗುವುದು.

### ೧೧ ಬಗೆತ್ತಲೆ (=ಬೈತಲೆ)

ಇಲ್ಲಿ 'ತಲೆ' ಎಂದರೆ, ಲಕ್ಷ್ಯಾರ್ಥಕವಾಗಿ ಕೂದಲು. ತಲೆಯ ಕೂದಲನ್ನು ಬಾಚಣಿಗೆಯಿಂದ ಅತ್ತಿತ್ತ ಬಗೆದು ವಿಭಾಗಮಾಡಿದುದು "ಬಗತ್ತಲೆ" (ಬಗೆತಲೆ) ಬಗತಲೆ-ಎಂಬುದು. ಇದು 'ಬಯಿತಲೆ', 'ಬೈತಲೆ'- ಆಗಿರುವಂತೆ ತೋರುತ್ತದೆ.

**೧೨. ಕೊದಿಲು** (ಕೊದಿ + ಇಲ್ = ಅನ್ನಕ್ಕೆ ಬೆರಸಿ ಉಣ್ಣುವ ಹುಳಿ ಅಥವಾ ಸಾಂಬಾರು.)

'ಕೊದಿ' ಎಂದರೆ ತಿನ್ನುವ ಅತ್ಯಾಶೆ. ಬಹಳ ಹಸಿದವನು ಊಟವನ್ನು ಪ್ರಾರಂಭಿಸಿ, ಕ್ರಮವಾಗಿ ತಂಬುಳಿ, ತುಪ್ಪದನ್ನ, ಶೋವೆ, ಪಲ್ಯ, ಸಾರು— ಇವನ್ನು ಉಂಡನಂತರ ಕೊದಿಲನ್ನು ಬಳಸುವುದು ಹವಿಕರ ರೂಢಿ. ಕೊದಿಲು ತರುವ ಹೊತ್ತಿಗೆ ಉಣ್ಣುವವರ 'ಕೊದಿ' ಕಡಮೆಯಾಗಿರುತ್ತದೆ, ಹಸಿವು ಇಂಗಿರುತ್ತದೆ. 'ಕೊದಿಲು' ಉಂಡನಂತರ 'ಕೊದಿ' ಸ್ವಲ್ಪವೂ ಉಳಿಯುವುದಿಲ್ಲ. ಈ ಅರ್ಥದಿಂದ 'ಕೊದಿಲ್' ಶಬ್ದವು ಸಾರ್ಥಕವಾಗುತ್ತದೆ. ತುಳುವಿನಲ್ಲಿ ಇದನ್ನು 'ಕೊದ್ದೆಲ್' ಎನ್ನುತ್ತಾರೆ.

**೧೩. ಮೇಲಾರ** (= ಕಾಯಿಹುಳಿ, ಮಜ್ಜಿಗೆ ಹುಳಿ)

ಮೇಲು + ಆರ–ಎಂಬ ಪದಗಳ ಕೂಟ ಇದರಲ್ಲಿದೆ. 'ಮೇಲು' ಎಂದರೆ ಇಲ್ಲಿ 'ಕೊನೆ' ಎಂದರ್ಥ. 'ಆರ' ಎಂದರೆ 'ಆಹಾರ'. ಅನ್ನಕ್ಕೆ ಸೇರಿಸಿ ಉಣ್ಣುವ ಅಡುಗೆಗಳಲ್ಲೆಲ್ಲ ಇದು ಮೇಲಿನದು. ಅಂದರೆ, ಶ್ರೇಷ್ಠವಾದುದು ಮತ್ತು ಕೊನೆಯದು. ದಕ್ಷಿಣ ಕನ್ನಡದ ಹವಿಕರಲ್ಲಿ ಇದನ್ನು ಎಲ್ಲ ಅಡಿಗೆ ವಸ್ತುಗಳನ್ನು ಬಳಸಿ ಆದನಂತರ, ಅಂದರೆ, ಮಜ್ಜಿಗೆ ಮೊಸರುಗಳ ಬಳಕೆಗೆ ಮೊದಲು ಬಳಸುವುದು ರೂಢಿ. ಈ ಕಾರಣದಿಂದ ಇದು 'ಮೇಲಾರ'ವಾಗಿದೆ.

**೧೪ ಸೊರಕ್ಕಾಯಿ, ಸೊರೆಕ್ಕಾಯಿ** (= ಸೋರೆಕಾಯಿ).

ಪುಂಗಿ, ತಂಬೂರಿ ಇತ್ಯಾದಿ ಶ್ರುತ್ಯುಪಕರಣವಾಗಿದ್ದು, ಇದು ಸೊರ (= ಸ್ವರ) + ಕಾಯಿ—ಎನಿಸಿದೆ. ಅಥವಾ ಸುರೆ (ಮದ್ಯ) ತುಂಬಿಸಿ ಮರದಿಂದ ಕೆಳಗಿಳಿಸಲು ಉಪಯುಕ್ತವಾದುದು. 'ಕುಡು' ಎಂಬುದು 'ಕೊಡು' ಆದಂತೆ 'ಸುರೆ' 'ಸೊರೆ' ಯಾಗಬಲ್ಲುದು. ತುಳುವಿನಲ್ಲಿ ಇದನ್ನು "ತುರೆ" ಎನ್ನುವರು. "**ಸೋರೆಕಾಯಿ**" ಎಂದಾಗ ಆ ವಸ್ತುವಿನ ಉಪಯೋಗದ ಭಾವವೇನೂ ಆಗುವುದಿಲ್ಲ. ಹವಿಕರ ಕನ್ನಡದ ಮೂಲಕ ಅದರ ವ್ಯುತ್ಪತ್ತಿ ವೇದ್ಯವಾಗುತ್ತದೆ.

## ೧೫. ಹೊದಳು (=ಅರಳು).

ಬತ್ತ, ಜೋಳ ಮುಂತಾದವನ್ನು ಹುರಿದಾಗ, ಅದು ವಿಸ್ತೃತವಾಗಿ "ಹೊದಳು" ಆಗುತ್ತದೆ. ಪೊದಟ್ = ವ್ಯಾಪಿಸು. 'ಅರಳು' ಎಂಬುದೂ 'ವಿಕಾಸವಾಗು' ಎಂಬ ಅರ್ಥವನ್ನೇ ಕೊಡುವುದು. ತುಳುವಿನಲ್ಲಿ ಇದನ್ನು "ಪೊರಿ" ಎನ್ನುವರು. 'ಪೊರೆ' ಎಂದರೆ 'ಹಿಗ್ಗಿಕೊಳ್ಳು' ಎಂದು ಕನ್ನಡದಲ್ಲಿ ಪ್ರಯೋಗದಲ್ಲಿದೆ. 'ಹೊದಳು' ಎಂಬುದು ಹವಿಕರ ನುಡಿಯಲ್ಲಿದ್ದು ಕನ್ನಡದ ಸಾಹಿತ್ಯ ಭಾಷೆಗೆ ಸೇರಲು ಅರ್ಹವಾಗಿದೆ

## ೧೬. ಕೆಬಿರ (=ಕಿವುಡ).

'ಕಿವಿ' ಎಂಬುದು ತುಳುವಿನಲ್ಲಿ 'ಕೆಬಿ'. ಅದೇ ಶಬ್ದಾರ್ಥದಲ್ಲಿ ಹವಿಕರ ನುಡಿಯಲ್ಲಿ "ಕೆಬಿ + ಇರ" ಎಂಬುದು ಬಂದಿದೆ. ಇಲ್ಲಿ ಕೆಬಿ (ಕಿವಿ)—ಎಂದರೆ 'ಶ್ರವಣಶಕ್ತಿ' ಎಂದು ಲಕ್ಷ್ಯಾರ್ಥವನ್ನಿಟ್ಟುಕೊಳ್ಳಬೇಕು. 'ಇರ'—ಇರದು, ಇಲ್ಲದವ. ನಿಂದಿಸುವ ಸಂದರ್ಭದಲ್ಲಿ 'ಕೆಬಿರ' ಎಂತಲೂ, ವಾರ್ತೆಯ ಸಂದರ್ಭದಲ್ಲಿ "ಪೊಟ್ಟ" ಎಂತಲೂ ಕಿವುಡನನ್ನು ಹವಿಕರು ಹೇಳುವರು.

## ೧೭. ಬಕ್ಕೆ.

'ಬಕ್ಕೆವಲಸು' ಎಂಬ ಹಲಸಿನ ಪ್ರಭೇದವನ್ನು ಕಾವ್ಯಗಳಲ್ಲಿ ಕಾಣುತ್ತೇವೆ. ಗಟ್ಟಿಯಾದ ಸೊಳೆಗಳಿರುವ ಹಲಸಿನ ಹಣ್ಣಿನ ಜಾತಿಗೆ 'ಬಕ್ಕೆ' ಎಂದು ಹೆಸರು. ಇದು 'ಬಲಿಕ್ಕೆ' ಎಂಬ ಶಬ್ದದಿಂದ ಬಂದಿರಬಹುದು. ಬೇಯದ ಅನ್ನದ ಅಗುಳನ್ನು "ಇದು ಬಲಿಕ್ಕೆ" ಆಗಿದೆ ಎನ್ನುತ್ತಾರೆ.

## ೧೮. ಸಕ್ಕಣ (=ಉದ್ಧರಣೆ).

ಆಚಮನ, ಅರ್ಘ್ಯಕ್ರಿಯೆಗಳಿಗೆ ಸಾಧನವಾಗಿರುವ ಲೋಹದ ಚಿಕ್ಕ ಸೌಟು ಇದು. 'ಸಕ್ಕ + ಅಣ'-ಇಲ್ಲಿ 'ಸಕ್ಕ' ಎಂದರೆ ಚಿಕ್ಕದು. ಅಣ (ಆಣ) = ಲೋಹದಿಂದ ಮಾಡಿದುದು. 'ಸಕ್ಕರೆ' ಎಂಬಲ್ಲಿ "ಚಿಕ್ಕದಾದ ಕಲ್ಲು (ಅಜ಼್ = ಕಲ್ಲು)" ಎಂದು ಅರ್ಥವಾಗುವುದು. ಈ 'ಸಕ್ಕಣ' ಎಂಬುದರ ವ್ಯುತ್ಪತ್ತಿಯ ಆಧಾರದಿಂದ ಹರಿವಾಣ, ತಿಂಬಾಣ, ಕಡಿವಾಣ, ಉಡಿಯಾಣ

ಇತ್ಯಾದಿ ಶಬ್ದಗಳಿಗೂ ವ್ಯುತ್ಪತ್ತಿಯನ್ನು ಕಂಡುಹಿಡಿಯಬಹುದು. (ತುಳುವಿನಲ್ಲಿ 'ಚಕ್ಕಣ' ಎಂಬೊಂದು ಪದವಿದೆ. ಚಿಕ್ಕ ಮಗುವಿಗಾಗಿ ಮಾಡಿರುವ ಚಾಪೆಗೆ ಆ ಹೆಸರಿದೆ. ಅಲ್ಲಿ 'ಚಕ್ಕ' ಎಂಬುದಕ್ಕೆ "ಚಿಕ್ಕ" "ಮಗು"-ಎಂದು ಅರ್ಥವಾಗುವುದು. 'ಅಣ' ಎಂದರೆ ಅಲ್ಲಿ ಬೆಲೆಯುಳ್ಳ ಒಂದು ವಸ್ತು-ಎಂದು ತಿಳಿದುಕೊಳ್ಳಬೇಕು).

ಕನ್ನಡ ಭಾಷೆಯ ಸಂಪದಭಿವೃದ್ಧಿಗೆ ಈ ಹವ್ಯಕ ಭಾಷೆ ಉಪಯುಕ್ತವಾದೀತು. ಹಲವು ಶಬ್ದಗಳ ಮೂಲವನ್ನೂ ಅವುಗಳ ಅರ್ಥದ ಸೆಲೆಯನ್ನೂ ಶೋಧಿಸುವುದಕ್ಕೆ ಈ ಭಾಷೆಯ ಪರಿಜ್ಞಾನವು ಸಹಾಯಕವಾಗುವುದು ನಿಶ್ಚಯ.*



---

* ಹೆಚ್ಚಿನ ಓದಿಕೆಗಾಗಿ ಈ ಕೆಳಗಿನವುಗಳನ್ನು ನೋಡಬಹುದು :—

1 ಟಿ. ಕೇಶವ ಭಟ್ಟ-"ಅನನ್ಯದೇಶೀಕೋಶ" ಎಂಬ ನಿಘಂಟು-ಪ್ರ.ಕ. (೧೯೬೪) ಸಂಪುಟ ೪೬, ಸಂಚಿಕೆಗಳು ೨ ಮತ್ತು ೩.

2 ಶ್ರೀ ತೆಕ್ಕುಂಜ ಗೋಪಾಲಕೃಷ್ಣ ಭಟ್ಟ-ಮಂಗಳೂರು ಹವೀಕರ ಆಡುನುಡಿ-ಎಂಬ ಲೇಖನ-ಪ್ರ. ಕ. ೪೭, ಸಂಚಿಕೆ ೧. (೧೯೬೫).

3 ಪ್ರೊ॥ ಎಂ. ಮರಿಯಪ್ಪ ಭಟ್ಟ-ಕನ್ನಡ ಸಂಸ್ಕೃತಿ (೧೯೬೮)-ಈ ಗ್ರಂಥದಲ್ಲಿ "ದಕ್ಷಿಣ ಕನ್ನಡದ ಹವ್ಯಕ ಭಾಷೆ" ಎಂಬ ಲೇಖನ.